ಎಂ. ಜಿ. ನಾಗರಾಜ್

# ಕೊಡಗು ಶ್ರೀರಂಗಪಟ್ಟಣ : ಒಂದು ಶೋಧನೆ

ಕರ್ನಾಟಕದ ಮಂಡ್ಯಜಿಲ್ಲೆಯ ಶ್ರೀರಂಗಪಟ್ಟಣ, ಶಿವನಸಮುದ್ರ, ತಮಿಳುನಾಡಿನ ಶ್ರೀರಂಗಗಳಲ್ಲಿ ಶ್ರೀರಂಗನಾಥನ ಸಾನ್ನಿಧ್ಯವಿದೆ. ಕ್ರಮವಾಗಿ ಅವುಗಳು ಆದಿ, ಮಧ್ಯ ಹಾಗೂ ಅಂತ್ಯ ರಂಗನ ನೆಲೆಗಳೆನಿಸಿವೆ. ಗಮನಾರ್ಹ ಅಂಶವೆಂದರೆ, ಶ್ರೀರಂಗನ ಈ ಸನ್ನಿಧಿಗಳೆಲ್ಲ ಕಾವೇರಿ ಬಳಸಿದ ದ್ವೀಪವಾಗಿರುವುದು ಹಾಗೂ ಈ ಎತ್ತರದ ನೆಲೆಗಳು ಗೌತಮ ಕ್ಷೇತ್ರಗಳೆಂದು ಕರೆಸಿಕೊಂಡಿರುವುದೇ ಆಗಿದೆ. 'ಶ್ರೀರಂಗಪಟ್ಟಣವೆಸೆದಿಹುದುಭಯ ಕಾವೇರಿಯ ಮಧ್ಯದೊಳಾಗ' ಎಂಬ ಗೋವಿಂದ ವೈದ್ಯನ 'ಕಂಠೀರವ ನರಸರಾಜ ವಿಜಯ'ದಲ್ಲಿನ ಉಲ್ಲೇಖ, ಹುಣಸೂರು ಶಾಸನದಲ್ಲಿನ 'ಕಾವೇರಿ ಮಧ್ಯವರ್ತಿಯಹಾದ ಶ್ರೀರಂಗಪಟ್ಟಣವೆಂಬ ಗೌತಮಕ್ಷೇತ್ರದಲ್ಲಿ ರಂಗನಾಥಸ್ವಾಮಿಯವರ ಚರಣಾ' ಎಂಬ ಸಾಲು,[1] 'ಶ್ರೀರಂಗಪಟ್ಟಣ'ಗಳಿರುವ ಪರಿಸರವನ್ನು ಮತ್ತು ಪೌರಾಣಿಕ ಪರಂಪರೆಯನ್ನು ಉದ್ದೇಶಿಸಿ ಹೇಳಿರುವಂತಿವೆ.

ಕೊಡಗಿನಲ್ಲಿಯೂ 'ಶ್ರೀರಂಗಪಟ್ಟಣ'ವೊಂದಿದ್ದು, 'ಕೊಡಗು ಶ್ರೀರಂಗಪಟ್ಟಣ'ವೆಂಬ ಹೆಸರನ್ನು ಕ್ರಿ.ಶ. ೧೮೨೨ರ ಶಾಸನದಲ್ಲಿ ಕಂಡರೆ,[2] ಅದಕ್ಕೆ ಮೊದಲಿನ ಶಾಸನ ಹಾಗೂ ದಾಖಲೆಗಳಲ್ಲಿ 'ಕೊಡಗು' ಎಂಬ ವಿಶೇಷಣವಿಲ್ಲದೆ, ಆ ನೆಲೆಯನ್ನು 'ಶ್ರೀರಂಗಪಟ್ಟಣ'ವೆಂದೇ ಉಲ್ಲೇಖಿಸಲಾಗಿದೆ.[3] ಈ ಪಟ್ಟಣವು ಪ್ರಸ್ತುತ ಸಿದ್ದಾಪುರದ ದಕ್ಷಿಣಕ್ಕಿದ್ದು, 'ರಂಗಪಟ್ಟಣ' ಎಂಬ ಹೆಸರು ಪಡೆದಿತ್ತು. ಹೊಳೆಸಾಲು ಹಳ್ಳಿಗಳು ಇದರ ಸನಿಹದಲ್ಲಿದ್ದುವೆಂತಲೂ[4] ಇದು ಮಾಲ್ದಾರೆ ಬಳಿ ಇದ್ದಿತೆಂತಲೂ[5] ವ್ಯಕ್ತಪಡುತ್ತದೆ. ಕೊಡಗಿನ ಹಳೆಯ




1 ಎ.ಕ., ಸಂಪುಟ ೧, ಕೊಡಗುಜಿಲ್ಲೆ (ಪರಿಷ್ಕೃತ ಆವೃತ್ತಿ, ೧೯೭೨), ಮಡಿಕೇರಿ ೩ (೨೫), ಕ್ರಿ.ಶ. ೧೮೨೨
2 ಅದೇ, ಸಂಪುಟ ೮, ೧೯೮೪, ಅರಕಲಗೂಡು ೫೩, ಕ್ರಿ.ಶ. ೧೨೫೨
3 ಅದೇ, ಸಂಪುಟ ೪, ೧೯೭೫, ಹುಣಸೂರು ೩೨ (ತರೀಕಲ್ಲು), ಕ್ರಿ.ಶ. ೧೬೬೯
4 ನಡಿಕೇರಿಯಂಡ ಚಿಣ್ಣಪ್ಪ (ಸಂ.) : ಪಟ್ಟೋಲೆ ಪಳಮೆ, ಮೈಸೂರು, ೧೯೭೫, ಪು- ೨೨
5 ಅದೇ

ಭೂಪಟಗಳಲ್ಲಿಯೂ ಇದರ ನೆಲೆಯ ವಿಸ್ತಾರವಿದ್ದು ದನ್ನು ಸೂಕ್ತವಾಗಿ ನಿರ್ದೇಶಿಸಿಲ್ಲ. ೧೮೩೪ರ ಹಾಲೇರಿ ಅರಸರ ಅಂಕಿತದಲ್ಲಿದ್ದ ಊರುಗಳ ಪಟ್ಟಿ ಹಾಗೂ ೧೯೩೦ರ ಕೊಡಗಿನ ಗ್ರಾಮಗಳ ವಿಸ್ತೀರ್ಣದ ದಾಖಲಾತಿ ಪಟ್ಟಿಗಳಲ್ಲಿ ಈ ಊರಿನ ಹೆಸರಿದ್ದರೂ ಮಾಲ್ದಾರೆಯ ಉಪಗ್ರಾಮವಾಗಿ ಸೂಚಿತವಾಗಿದೆ. ಇಂದು ಖಾಸಗಿ ಕಂಪನಿಯೊಂದರ ಹಾಗೂ ಹಿಡುವಳಿದಾರರ ಕಾಫಿ, ಮೆಣಸಿನ ತೋಟಗಳು ಈ ನೆಲೆಯ ಮೇಲೆ ಊರಿ ನಿಂತಿವೆ. ಹೀಗೆ ಹೆಸರು, ನೆಲೆಗಳ ಖಚಿತ ನಿರ್ದೇಶನ ವಿಲ್ಲದೆ ಈ ಪ್ರಾಚೀನ ಮಹತ್ವದ ನೆಲೆ ಪ್ರಸಿದ್ಧಿ ಕಳೆದು ಕೊಂಡಿದೆ.

ಈ ನೆಲೆ ಕುರಿತಂತೆ ಪರಿಸರದ ಸಾಕ್ಷ್ಯಗಳಾಗಿ ನಂಜರಾಯಪಟ್ಟಣದ ಕಾವೇರಿ ಹೊಳೆಸಾಲಿನಲ್ಲಿ ಹಳ್ಳಿಗಳು, ಹಳೆ ದಾಸವಾಳ ಗ್ರಾಮ, ಅವರೆಗುಂದ, ಕರಡಿಗೋಡು, ಗುತ್ತಿಮಠದ ಕಾಡು(ಹತ್ತು ಎಕರೆ),ಗುತ್ತಿಗುಡಿ, ಈಗಿನ ದುಬಾರೆ ಕಾಡಿನಲ್ಲಿರುವ ಪಂಚಲಿಂಗೇಶ್ವರ ಗುಡಿ, ಅಮ್ಮಾಳೆ ಕೆರೆಗಳು, ಅದರ ಸನಿಹದ ಗದ್ದುಗೆಗಳ ಅವಶೇಷ,ರುದ್ರಭೂಮಿಯ ಕುರುಹುಗಳು, ನಂಜುಂಡೇಶ್ವರ ಗುಡಿಯ ಬಲದ ಕಾವೇರಿದಂಡೆಯ ಪ್ರಾಚೀನ ಶಿಥಿಲ ಕರಿಶಿಲೆಗಳ ನಡುಹೊಳೆ ದೇಗುಲ, ಹಳೇ ದಾಸಿವಾಳ ಗ್ರಾಮದ ಬಳಿಯ ನಡುಹೊಳೆ ಪ್ರಾಚೀನ ವೃಷಭ, ಮಾಲ್ದಾರೆ ಕಾಡು, ಘಟ್ಟದಹಳ್ಳಿ, ಮಾರ್ಗೊಲ್ಲಿ, ಕೊಡಗು ಶ್ರೀರಂಗಪಟ್ಟಣದ ಅಳಿದುಳಿದ ನೆಲೆ, ಕೋಡಂಗಿಬೆಟ್ಟ, ದೊಡ್ಡಡ್ಲು, ಸಿದ್ದೇಶ್ವರ ಗದ್ದುಗೆ, ಜೊತೆಗೆ ಚನ್ನಯ್ಯನಕೋಟೆಯಿಂದ ಪಾಲ್ಪರೆವರೆಗಿನ ಹಾದಿ, ಮಾಲ್ದಾರೆ ದುಬಾರೆಕಾಡಿನ ಶಿಲ್ಪಶಾಸನ, ವೀರಗಲ್ಲುಗಳು ಇತರೆಡೆಯ ಪೋಷಕ ಶಾಸನೋಲ್ಲೇಖಗಳು ಇತ್ಯಾದಿಗಳನ್ನು ಗಮನಿಸಬಹುದು.

ಕ್ರಿ.ಶ. ೧೦೦೪ರಲ್ಲಿ ಗಂಗರ ರಾಜಧಾನಿ ತಲಕಾಡನ್ನು ವಶಪಡಿಸಿಕೊಂಡ ನಂತರ ರಾಜೇಂದ್ರ ಚೋಳನು ಕೊಡಗು (ಕೊಡಗು ಮಲೆನಾಡು) ಅವನ ಪಾಲಿಗೆ ಬರಲು,[6] ಕ್ರಿ.ಶ. ೧೦೦೪ರ ಪನಸೋಗೆಯ ಯುದ್ಧದಲ್ಲಿ ಅವನ ಪ್ರಸಿದ್ಧ ಸೇನಾಪತಿ ಪಂಚವ ಮಹಾರಾಯನು ಚಂಗಾಳ್ವರನ್ನು ಸೋಲಿಸಿದುದೇ[7] ಆಗಿದೆ. ಈ ಯುದ್ಧದಲ್ಲಿ ಜಯಕ್ಕೆ ಕಾರಣನಾದ 'ಮನಿಜ'ನ ಶೌರ್ಯವನ್ನು ಪಂಚವ ಮಹಾರಾಯನಿಂದ ತಿಳಿದು ಅವನಿಗೆ ಪಟ್ಟಕಟ್ಟಿ ನಾಡು ನೀಡಲು ರಾಜೇಂದ್ರಚೋಳ ಆದೇಶ ನೀಡಿದ. ಅದರಿಂದಾಗಿ 'ಕ್ಷತ್ರಿಯ ಶಿಖಾಮಣಿ ಕೊಂಗಾಳ್ವ' ಎಂಬ ಬಿರುದಿನೊಡನೆ 'ಮಾಲವ್ವಿ' ನಾಡನ್ನು ಪಡೆದು,[8] ಕೊಡಗಿನಲ್ಲಿ ಕೊಂಗಾಳ್ವ ಮನೆತನದ ಮೂಲಪುರುಷನಾಗಿ ೧೧ನೇ ಶತಮಾನದಲ್ಲಿ ಉದಿಸಿದ್ದ. ಅಂತಾಗಿ ಚಂಗಾಳ್ವರು ಮತ್ತು ಕೊಂಗಾಳ್ವರು ಚೋಳರ ಮಾಂಡಲಿಕರಾದರು.

ಚೋಳರು ಹೀಗೆ ಕೊಡಗಿನ ಮೇಲೆ ಹಿಡಿತ ಸಾಧಿಸಿದ ನಂತರ, ಕೊಡಗಿನ ಪೂರ್ವಗಡಿಯಲ್ಲಿ ಕಾವೇರಿ ದಂಡೆಯ ಬಳಿ ವೀರಭದ್ರದೇವರ ದೇಗುಲವನ್ನು ಕಟ್ಟಿ, 'ಚೋಳಪ್ರತಿಷ್ಠಾ ವೀರಭದ್ರ' ಎಂದೇ ಹೆಸರಾಗಿಸಿದರು.[9] ಚೋಳ ವೀರಭದ್ರನ ನೆಲೆಯ ಕಾರಣ, ಈಗಿನ ನಂಜರಾಯಪಟ್ಟಣ ಹಾಗೂ ದುಬಾರೆಕಾಡಿನ ಪ್ರದೇಶ ವೆಲ್ಲವೂ ಕೊಂಗಾಳ್ವರ ಅಧಿಕಾರ ವ್ಯಾಪ್ತಿಗೆ ಬಂದಿರಬೇಕು. ಆದರೆ 'ಕೊಡಗು ಶ್ರೀರಂಗಪಟ್ಟಣ' ಎಂಬ ಹೆಸರಿನ ನೆಲೆ ಇಲ್ಲಿ ಚೋಳರ ಕಾಲಕ್ಕೆ ಇತ್ತೆಂಬುದಕ್ಕೆ ಪುರಾವೆಗಳು ಕಾಣಬರುತ್ತಿಲ್ಲ.

ಚಂಗಾಳ್ವರು ಹತ್ತನೆಯ ಶತಮಾನದಲ್ಲಿ ಕೊಡಗಿನ ಪೂರ್ವಭಾಗದ ಹುಣಸೂರು ತಾಲ್ಲೂಕಿನಲ್ಲಿದ್ದು, ಕೊಡಗಿನ ಕೆಲವು ಭಾಗಗಳನ್ನು ಗಂಗರ ಮಾಂಡಲಿಕರಾಗಿ ಆಳಿರಬಹುದಾದರೂ ೧೧ನೆಯ ಶತಮಾನದಲ್ಲಿ ಚೋಳರ ಅಧೀನರಾದರು. ಆದರೆ ಆಗಲೂ ನಂಜರಾಯಪಟ್ಟಣ, ಕೊಡಗು ಶ್ರೀರಂಗಪಟ್ಟಣ ಪ್ರದೇಶಗಳು ಅವರ ವಶದಲ್ಲಿರಲಿಲ್ಲ. ಆದ್ದರಿಂದ ೧೨ನೆಯ ಶತಮಾನದಲ್ಲಿನ

6 *Coorg District Gazetteer*, Bangalore, 1965, p. 44

7 ಬಿ. ಎ. ಸಾಲತ್ತೊರೆ, ಪಾಂಡುರಂಗ ದೇಸಾಯಿ (ಸಂ.) : ಕನ್ನಡನಾಡಿನ ಚರಿತ್ರೆ (ಮೊದಲನೆಯ ಭಾಗ), ಬೆಂಗಳೂರು, ೧೯೭೩, ಪು. ೩೭

8 ಎ. ಕ., ಸಂಪುಟ ೧ (ಪರಿಷ್ಕೃತ ಆವೃತ್ತಿ), ಮೂಲಂಬಿ ೬೫ (೪೬), ಪು. ೪೪

9 *Coorg District Gazetteer*, pp. 44–45

ಕೊಂಗಾಳ್ವರ ಅಧೀನ ಕಾಲದಲ್ಲಿಯೂ ಕೊಡಗು ಶ್ರೀರಂಗಪಟ್ಟಣ ಇನ್ನೂ ರೂಪುಗೊಂಡಿರಲಿಲ್ಲವೆಂದು ತೋರುತ್ತದೆ.

ಕೊಡಗಿನಲ್ಲಿ ಕೊಂಗಾಳ್ವ ಮತ್ತು ಚಂಗಾಳ್ವರ ಮೂಲಕ ನಡೆದ ಚೋಳರಾಳ್ವಿಕೆಯನ್ನು ಹೊಯ್ಸಳರು ಕ್ರಿ.ಶ. ೧೧೦೬ರ ವೇಳೆಗೆ ಅಂತ್ಯಗೊಳಿಸಿದರು. ಇನ್ನು ಚಂಗಾಳ್ವರು ಸ್ವತಂತ್ರರಾಗುವ ಯತ್ನವನ್ನು ಕ್ರಿ.ಶ. ೧೧೩೦ರಲ್ಲಿ ಹೊಯ್ಸಳರಿಗೆ ಸೋತರೂ ಮತ್ತೆ ಕ್ರಿ ಶ. ೧೧೫೫ರಲ್ಲಿ ಹೊಯ್ಸಳ ಸೇನಾಧಿಕಾರಿ ಚೋಕಿಮಯ್ಯ ಚಂಗನಾಡನ್ನು ಜಯಿಸಿದರೂ ಕ್ರಿ. ಶ. ೧೧೭೧ರವರೆಗೂ ಅವರ ಪ್ರಯತ್ನ ನಿಂತಿರಲಿಲ್ಲ. ಅಲ್ಲದೆ ಕ್ರಿ.ಶ. ೧೧೫೦ ರಲ್ಲಿಯೇ ಕೊಂಗಾಳ್ವರೊಡನಾದ ಯುದ್ಧದಲ್ಲಿ ಚಂಗಾಳ್ವರಿಗೆ ಗೆಲವು ದೊರೆಯಲಿಲ್ಲ.[10] ಈ ಕಾರಣದಿಂದ ನಂಜರಾಯಪಟ್ಟಣದ ಸುತ್ತಮುತ್ತಲ ಪ್ರದೇಶವೆಲ್ಲವೂ ಕೊಂಗಾಳ್ವರ ಅಧೀನದಲ್ಲಿಯೇ ಇತ್ತೆಂದು ತೋರುತ್ತದೆ. ಇನ್ನು ಚಂಗಾಳ್ವ ಮಹಾದೇವನು ಹುಣಸೂರು ತಾಲೂಕಿನ ಬಯಲು ಪ್ರದೇಶದಲ್ಲಿದ್ದ ರಾಜಧಾನಿಯನ್ನು ಬಿಟ್ಟು ಹೆಚ್ಚಿನ ಭದ್ರತೆಗಾಗಿ ಕೊಡಗಿನ ಕಿಗ್ಗಟ್ಟುನಾಡಿನ ಪಾಲ್ಪರೆಯಲ್ಲಿ ಕೋಟೆಕಟ್ಟಿ ನಿಂತು ಸ್ವತಂತ್ರನಾಗ ಬಯಸಿದಾಗ ಕ್ರಿ.ಶ. ೧೧೭೧ರಲ್ಲಿ ಹೊಯ್ಸಳ ಬಲ್ಲಾಳನು ಕಳುಹಿಸಿದ ದಂಡನಾಯಕ ಬೆಟ್ಟರಸನು ಚಂಗಾಳ್ವ ಮಹಾದೇವನನ್ನು ಸೋಲಿಸಿ, ಕೊಂದು ಪಾಲ್ಪರೆಯಲ್ಲಿ ತನ್ನ ಆಡಳಿತ ಸ್ಥಾಪಿಸಿದ. ಆಗ ಪಾಲ್ಪರೆಯು ಒಂದು ಪಟ್ಟಣವಾಗಿತ್ತು. ಹೀಗಾಗಿ ಪಾಲ್ಪರೆ ಹಾಗೂ ಕೊಡಗು ಶ್ರೀರಂಗಪಟ್ಟಣಗಳಿಗೆ ಸಂಬಂಧ ಕೂಡಿಕೊಳ್ಳುವುದು ಗಮನಾರ್ಹ.

ಹೊಯ್ಸಳ ಒಂದನೆಯ ವೀರಬಲ್ಲಾಳನು (ಕ್ರಿ.ಶ. ೧೧೭೩–೧೨೨೦) ಚೋಳರಾಜ ಪುತ್ರಿ ಮಹಾದೇವಿಯನ್ನು ಮದುವೆ ಆಗಿದ್ದ. ಈ ಬಲ್ಲಾಳನ ಮೊಮ್ಮಗ ಹೊಯ್ಸಳ ಸೋಮೇಶ್ವರ ಚೋಳರಾಜ ಪುತ್ರಿಯನ್ನು ಮದುವೆ ಆಗಿದ್ದ. ಈಕೆ ಶ್ರೀರಂಗದವಳೆಂದು ತೋರುತ್ತದೆ. ಕ್ರಿ.ಶ. ೧೨೪೫ರಲ್ಲಿ ಹೊಯ್ಸಳ ಸೋಮೇಶ್ವರನು (೧೨೩೫–೧೨೫೪) ತಮಿಳುದೇಶದಲ್ಲಿ ವಾಸಿಸುತ್ತಿದ್ದು, ತನ್ನ ಚೋಳವಂಶದ ಪತ್ನಿಯು ಸತ್ತ ಮೇಲೆ ಅಲ್ಲಿಂದ ಹಾಸನ ಜಿಲ್ಲೆಯ ದ್ವಾರಸಮುದ್ರಕ್ಕೆ ಹೋಗುವಲ್ಲಿ ಅರಕಲಗೂಡು ರಾಮನಾಥಪುರಕ್ಕೆ ಬಂದ.[11] ಈ ಸಮಯದಲ್ಲಿ ಚಂಗಾಳ್ವ ರಾಜಕುಮಾರರಾದ ಸೋಮದೇವರಸ ಮತ್ತು ಬೊಪ್ಪದೇವರಸರು ಸೋಮೇಶ್ವರನನ್ನು ಎದುರ್ಗೊಂಡು ಗೌರವಾತಿಥ್ಯಗಳನ್ನು ಸಲ್ಲಿಸಿದರು. ಬಹುಶಃ ಆಗಲೇ ಹೊಯ್ಸಳ ಸೋಮೇಶ್ವರನು ಸುಪ್ರೀತನಾಗಿ ಶ್ರೀರಂಗಪಟ್ಟಣದ ಆಡಳಿತಕ್ಕೆ ಈ ಅರಸರನ್ನು ಬದ್ಧಗೊಳಿಸಿರಬೇಕು.[12] ಈ ಶ್ರೀರಂಗಪಟ್ಟಣವೇ ಕೊಡಗು ಶ್ರೀರಂಗಪಟ್ಟಣ. ಅದಾಗಿ ಕ್ರಿ.ಶ. ೧೨೪೫ರ ಸುಮಾರಿನಲ್ಲಿ ಚಂಗಾಳ್ವರು ಕಿಗ್ಗಟ್ಟುನಾಡಿನ ಪಾಲ್ಪರೆಯಿಂದ ಕಾವೇರಿ ದಕ್ಷಿಣದ ಈ ಕೊಡಗು ಶ್ರೀರಂಗಪಟ್ಟಣಕ್ಕೆ ತಮ್ಮ ರಾಜಧಾನಿಯನ್ನು ಬದಲಾಯಿಸಿದರು.[13] ಅಂದರೆ ಕೊಡಗು ಶ್ರೀರಂಗಪಟ್ಟಣದ ಅಸ್ತಿತ್ವ ಚಂಗಾಳ್ವರ ಆಳ್ವಿಕೆಯು ಅಲ್ಲಿ ಆರಂಭವಾಗುವ ಮುನ್ನವೆ ಇದ್ದ ಬಗ್ಗೆ ಸಮರ್ಥನೆ ದೊರಕುತ್ತದೆ ಹಾಗೂ ಪಾಲ್ಪರೆ, ಕೊಡಗು ಶ್ರೀರಂಗಪಟ್ಟಣದ ಸಂಪರ್ಕವು ಮುಂದುವರಿದು ಬಂದಿದ್ದು, ಚಂಗಾಳ್ವರ ಪರಂಪರೆಯಲ್ಲಿ ಬರುವ ಎರಡು ರಾಜಧಾನಿಗಳ ಪರಂಪರೆಯನ್ನು ಸೂಚಿಸುತ್ತದೆ. ಅಂತಾಗಿ ಕ್ರಿ.ಶ. ೧೨೨೦–೪೫ರ ನಡುವಣ ಅವಧಿಯಲ್ಲಿ ಕೊಡಗು ಶ್ರೀರಂಗಪಟ್ಟಣವು ರೂಪುಗೊಂಡು, ಪಾಲ್ಪರೆಯಲ್ಲಿದ್ದಂತೆ ಇಲ್ಲೊಂದು ಶ್ರೀರಂಗನಾಥನ ಗುಡಿಯೂ ನಿರ್ಮಿತವಾಗಿರುವಂತಿದೆ.

ಹೊಯ್ಸಳ–ಚೋಳ ವಂಶಗಳ ನಡುವೆ ಕ್ರಿ.ಶ. ೧೧೭೩ರಿಂದ ಆರಂಭವಾದ ವೈವಾಹಿಕ ಸಂಬಂಧಗಳು ಸುಮಾರು ಎಪ್ಪತ್ತೈದು ವರ್ಷಗಳ ಕಾಲ ಅಂದರೆ ಕ್ರಿ.ಶ. ೧೨೪೫ರವರೆಗೆ ಉಳಿದುಬಂದಿವೆ. ಸೋಮೇಶ್ವರನ

10 *Hassan District Gazetteer*, p. 55

11 ಡಿ. ಎನ್. ಕೃಷ್ಣಯ್ಯ : ಕೊಡಗಿನ ಇತಿಹಾಸ, ಮೈಸೂರು, ೧೯೭೪, ಪು. ೫೦; ಪುಸ್ತಕದಲ್ಲಿ ಕ್ರಿ.ಶ. ೧೨೪೫ ಎನ್ನುವ ಬದಲು ತಪ್ಪಾಗಿ ಕ್ರಿ.ಶ. ೧೨೫೨ ಎಂದಿದೆ.

12 ಎ.ಕ., ಸಂಪುಟ ೮, ಅರಕಲಗೂಡು ೫೩; *Hassan District Gazetteer*, p. 59

13 *Coorg District Gazetteer*, p. 48

ಚೋಳ ಪತ್ನಿ ಅಷ್ಟೇ ಅಲ್ಲ, ವೀರಬಲ್ಲಾಳನ ಚೋಳ ಸತಿ ಮಹಾದೇವಿಗೂ ತಮ್ಮ ಪೂರ್ವಿಕರು ವೀರಭದ್ರ ದೇವರ ಪ್ರತಿಷ್ಠಾಪನೆ ಮಾಡಿದ ಹಾಗೂ ಪಂಚಲಿಂಗೇಶ್ವರ ಗುಡಿಯ ನೆಲೆಯನ್ನು ನೋಡಲು ಕೊಡಗು ಶ್ರೀರಂಗಪಟ್ಟಣ ಪ್ರದೇಶಕ್ಕೆ ಬರುತ್ತಿದ್ದಿರಬೇಕು. ಅಲ್ಲಿಯ ಗುಡಿ ಹಾಗೂ ನೆಲೆ ಕ್ರಿ.ಶ. ೧೨೨೦-೪೫ರ ನಡುವಣ ಅವಧಿಯಲ್ಲಿ ರೂಪುಗೊಳ್ಳಲು ನಾಂದಿ ಆಗಿರಬೇಕು. ಆದರ ಹೊಣೆ ಹೊಯ್ಸಳರ ಪ್ರತಿನಿಧಿಯೊಬ್ಬನಿಗೆ ವಹಿಸಲ್ಪಟ್ಟಿದ್ದು, ನಂತರ ಬೊಪ್ಪದೇವನಿಗೆ ಈ ಹೊಣೆ ಬಂದಿರಬೇಕು. ಈ ದಿಸೆಯಲ್ಲಿ ಕೊಡಗು ಶ್ರೀರಂಗಪಟ್ಟಣದ ಜನಪದರು ಹೇಳುವ ಕಥೆಯೊಂದು ಮೇಲಿನ ಇತಿಹಾಸಕ್ಕೆ ಕೊಂಡಿಯಾಗಿರುವಂತಿದೆ.

ಕೊಡಗು ಶ್ರೀರಂಗಪಟ್ಟಣದ ನಂಜರಾಯಪಟ್ಟಣ ಪ್ರದೇಶದಲ್ಲಿ ಬೊಪ್ಪದೇವನ ಕಾಲದಲ್ಲಿ, ಹೊಳೆಯ ನಡುವಣ ಚೋಳಪ್ರತಿಷ್ಠಾ ವೀರಭದ್ರನ ಗುಡಿಯು ಪ್ರವಾಹದಿಂದ ಶಿಥಿಲವಾಗಿರಬಹುದಾದ್ದರಿಂದ, ಹೊಯ್ಸಳ ಶೈಲಿಯ ಸೊಗಸಾದ ಬೇರೊಂದು ವೀರಭದ್ರನ ಗುಡಿಯು ನಿರ್ಮಿತವಾಗಿದೆ.

ಪಾಲ್ಪರೆಯಲ್ಲಿ 'ಸೋಮೇಶ್ವರ'ನ ಗುಡಿಯ ಹಿಂದೆ ಸನಿಹದ ದೇಗುಲವು 'ಶ್ರೀರಂಗನಾಥ ದೇಗುಲ' ವಾಗಿದ್ದ ಕುರುಹುಗಳನ್ನು ಹೊಂದಿದೆ. ಪಾಲ್ಪರೆಯಲ್ಲಿಯೂ ಶ್ರೀರಂಗನಾಥ ದೇಗುಲವೊಂದಿದ್ದಿರಬೇಕು ಎಂಬುದನ್ನು ಸಮರ್ಥಿಸುವಂತಿವೆ. ಬೊಪ್ಪದೇವನ ಶ್ರೀರಂಗ ಭಕ್ತಿಯ ಪ್ರತೀಕವಾಗಿ ಈ ದೇಗುಲವು ಕೊಡಗು ಶ್ರೀರಂಗಪಟ್ಟಣಕ್ಕೆ ಅವನು ಬರುವ ಮುನ್ನವೇ ನಿರ್ಮಾಣವಾಗಿರಬೇಕು. ಈ ಕಾರಣ ಸೋಮೇಶ್ವರನ ಆದೇಶವೂ ದೊರೆತು ಕೊಡಗು ಶ್ರೀರಂಗಪಟ್ಟಣವನ್ನು ಚಂಗಾಳ್ವ ರಾಜಕುಮಾರರು ರಾಜಧಾನಿ ಮಾಡಿಕೊಂಡಿರಬೇಕು.

ಪಾಲ್ಪರೆ-ಕೊಡಗು ಶ್ರೀರಂಗಪಟ್ಟಣದ ದೇವ-ದೇವಿಯರ ದೇಗುಲ, ಶಿಲ್ಪಗಳನ್ನು ಗಮನಿಸಿದರೆ ಸೋಮದೇವ, ಬೊಪ್ಪದೇವರ 'ಹರಿ-ಹರ' ಸಮನ್ವಯ ದೃಷ್ಟಿ, ಕಲಾತ್ಮಕ ಅಭಿರುಚಿ ಹಾಗೂ ಧರ್ಮನಿಷ್ಠೆಗಳು ಗೋಚರವಾಗುತ್ತವೆ. ಅಲ್ಲದೆ, ಎರಡು ರಾಜಧಾನಿಗಳ ಅಸ್ತಿತ್ವ ಹಾಗೂ ಸಂಪರ್ಕಗಳ ಕಲ್ಪನೆಯನ್ನು ನೀಡುತ್ತವೆ. ಪಿರಿಯರಾಜದೇವನ ಹಿರಿಯ ಸೋದರನೆನ್ನಲಾದ ಕ್ರಿ.ಶ. ೧೫೫೫ರ ಚಂಗಾಳ್ವರಸ ವೀರ ವೀರದೇವನ ಅಪ್ರಕಟಿತ ಶಾಸನವು ಸ್ಥಳಾಂತರಗೊಂಡು, ಪಾಲ್ಪರೆ-ಹೆಬ್ಬಾಲೆಗೆ ಸಮೀಪ ನಲ್ಲೂಕೋಟೆಯಲ್ಲಿ ಕಂಡುಬಂದಿದೆ[14] ಇದು ಪಾಲ್ಪರೆ ಕೊಡಗು ಶ್ರೀರಂಗಪಟ್ಟಣಗಳ ನಡುವಣ ಮುಂದುವರಿದ ರಾಜಸಂಪರ್ಕದ ಬಗ್ಗೆ ಮತ್ತಷ್ಟು ಬೆಳಕು ಚೆಲ್ಲುವಂತಾಗಿದೆ.

ಇತ್ತೀಚೆಗೆ ನಂಜರಾಯಪಟ್ಟಣದಲ್ಲಿ ಲಭ್ಯವಾದ ಅಪ್ರಕಟಿತ ತುರುಗೋಳ ಶಾಸನ ರೀತ್ಯ ಶಕ ೧೨೨೦ನೇ ರುಧಿರೇ ರುಧಿರೋದ್ಗಾರಿ(?) ಸಂವತ್ಸರದಲ್ಲಿ ಮಹಾಮಂಡಳೇಶ್ವರ ವೀರಚೋಳದೇವರಸನ ಆಳ್ವಿಕೆ ಕಂಡು ಬರುವ ಕಾರಣ, ಅದು ಹರಿಹರದೇವನಿಗೇ ಅನ್ವಯಿಸುತ್ತದೆ. ಅಂದರೆ ಕ್ರಿ.ಶ. ೧೨೯೮ರಲ್ಲಿಯೂ ಚಂಗಾಳ್ವರು ಹೊಯ್ಸಳರ ಮಾಂಡಲಿಕರಾಗಿ ಕೊಡಗು ಶ್ರೀರಂಗಪಟ್ಟಣವನ್ನು ಆಳಿದರೆಂದು ಅರಿವಾಗುತ್ತದೆ. ಹೀಗೆ ೧೩ನೇ ಶತಮಾನದ ಪೂರ್ಣ ಚಂಗಾಳ್ವರ ಕೊಡಗು ಶ್ರೀರಂಗಪಟ್ಟಣದ ಆಳ್ವಿಕೆ ಚಾರಿತ್ರಿಕವಾಗಿದೆ.

೧೪ನೆಯ ಶತಮಾನದಲ್ಲಿ ಮೂರನೆಯ ಬಲ್ಲಾಳನ ಕಾಲದಲ್ಲಿ ಮಲ್ಲಿಕಾಫರನು ದಕ್ಷಿಣಕ್ಕೆ ದಂಡೆತ್ತಿ ಬಂದು ದಕ್ಷಿಣದ ರಾಜರನ್ನೆಲ್ಲ ಸೋಲಿಸಿ, ಕ್ರಿ. ಶ. ೧೩೧೧ರಲ್ಲಿ ಹೊಯ್ಸಳ ಬಲ್ಲಾಳನನ್ನು ಸೋಲಿಸಿದ ಮೇಲೆ ಹೊಯ್ಸಳರ ಬಲವು ತಗ್ಗಿತು. ಅವರ ಮಾಂಡಲೇಶ್ವರರ ಬಲವು ಕುಗ್ಗಿತು. ಆದಾಗಿ ಹದಿಮೂರನೆಯ ಶತಮಾನ

14 ೮-೪-೧೯೮೭ರ ಪ್ರಜಾವಾಣಿ ಸಂಚಿಕೆಯಲ್ಲಿ, ಕೊಡಗಿನ ಆತ್ಮೀಯ ಸಂಶೋಧನ ಕೇಂದ್ರದವರು ಈ ಶಾಸನವನ್ನು ಕಂಡು ಹಿಡಿದ ವಿಷಯ ಪ್ರಕಟವಾಗಿದೆ. ಆದರೆ ಶಾಸನಪಾಠವು ಅದರಲ್ಲಿ ಪ್ರಕಟವಾಗಿರಲಿಲ್ಲ. ಅಲ್ಲದೆ ಕ್ರಿ. ಶ. ೧೫೫೯-೮೦ರ ವರೆಗೆ ಆಳಿದ ಚಂಗಾಳ್ವರಸ ವೀರರಾಜ ಒಡೆಯನನ್ನು ಉಳಿದು ಅವನಿಗೂ ಹಿರಿಯನಾಗಿ ವೀರ ವೀರದೇವನು ಆಳಿದನೆ ಎಂಬುದು ಸುದ್ದಿಯಿಂದ ಸ್ಪಷ್ಟವಾಗಿಲ್ಲ. ಹಾಗಿದ್ದರೆ ಪೆರಿಯರಾಜದೇವನಿಗೆ ಇಬ್ಬರು ಹಿರಿಯ ಸೋದರರಿರಬೇಕು ಎಂದಾಗುತ್ತದೆ. ತಪ್ಪಿದರೆ ವೀರರಾಜ ಒಡೆಯನಿಗೆ ಈ ಶಾಸನ ಅನ್ವಯವಾದರೆ, ಅವನ ಕಾಲವನ್ನು ಕ್ರಿ. ಶ. ೧೫೫೯-೮೦ರ ಬದಲು ಕ್ರಿ. ಶ. ೧೫೫೫-೮೦ ಎಂದು ಹೇಳಬೇಕಾಗುತ್ತದೆ.

ದಿಂದ ಹದಿನೈದನೆಯ ಶತಮಾನದ ಮಧ್ಯಭಾಗದವರೆಗೆ ಚಂಗಾಳ್ವ ಅರಸರೂ ಬಲಗುಂದಿದವರಾಗಿ ಕೊಡಗಿನ ಶ್ರೀರಂಗಪಟ್ಟಣದ ಸುತ್ತಲಿನ ಹಳ್ಳಿಗಳನ್ನು ಆಳುತ್ತಿದ್ದರೆಂದು ತೋರುತ್ತದೆ.[15] ಆದರೆ ಕ್ರಿ. ಶ. ೧೩೦೦ರ ನಂತರ ರಾಜಕೀಯ ಜೀವನದಲ್ಲಿ ಕೊಡಗು ಶ್ರೀರಂಗಪಟ್ಟಣದ ಅರಸರು ಏಳುಬೀಳು ಕಂಡರೂ ಅದಕ್ಕೆ ಒಂದೆರಡು ವರ್ಷಗಳ ಹಿಂದೆಯೂ ಚೌಡ್ಲು, ಕುಂದೂರು ಗಳಲ್ಲಿ ಠಾವಮಾನೆಗಳನ್ನೂ ಹೊಂದಿ, ಕ್ರಿ. ಶ. ೧೨೯೮ರ ಹೊಸ ಶಾಸನದಿಂದಲೂ ಕ್ರಿ.ಶ. ೧೩೦೦ರ ನಂತರ ಚಂಗಾಳ್ವರ ಅಸ್ತಿತ್ವ ಅಳಿಸಿಹೋಗಲಿಲ್ಲ ಎಂಬುದು ಸ್ಪಷ್ಟ. ಕ್ರಿ.ಶ. ೧೫೦೨ಕ್ಕೆ ಮುಂಚೆಯೂ ಚಂಗಾಳ್ವರಸನಾದ ನಾಗರಾಜ, ರಂಗರಾಜ, ಪೆರಿಯಣ್ಣರಾಜರು ಕೊಡಗಿನ ಶ್ರೀರಂಗಪಟ್ಟಣವನ್ನೂ ಆಳಿರುವುದರಿಂದ ಅದರ ಸುತ್ತಮುತ್ತಲಿನ ಹಳ್ಳಿಗಳ ಜೊತೆಗೆ ಉತ್ತರ ಕೊಡಗಿನ ಚೌಡ್ಲು, ಕುಂದೂರು, ಹಾಲೇರಿ ಮುಂತಾದ ಭಾಗಗಳನ್ನು ೧೪_೧೫ನೆಯ ಶತಮಾನಗಳಲ್ಲಿಯೂ ತಮ್ಮ ಅಂಕೆಯಲ್ಲಿರಿಸಿಕೊಂಡಿಬೇಕು ಹಾಗೂ ಅವುಗಳು ಅವರ ವಂಶದ ಅರಸು ಶಾಖೆಗಳಿಗೆ ತತ್ಕಾಲೀನ ಆಶ್ರಿತ ಸ್ಥಾನಗಳೂ ಆಗಿರುವಂತಿವೆ. ಈ ಕಾರಣಗಳಿಂದಲೇ ೧೫ನೆಯ ಶತಮಾನದ ಪೂರ್ವಭಾಗದಲ್ಲಿಯೆ ತಮ್ಮ ರಾಜಧಾನಿ ಕೊಡಗು ಶ್ರೀರಂಗಪಟ್ಟಣದಲ್ಲಿ, ವಿಜಯನಗರದರಸರ ಕೃಪೆಗೂ ಪಾತ್ರರಾಗಿ, ಮತ್ತೆ ಪ್ರಸಿದ್ಧರಾದರೆಂದು ಸ್ಪಷ್ಟವಾಗುತ್ತದೆ.[16] ನಾಗರಹೊಳೆಯ ಬಳಿಯ ಕುಂತೂರು ಪಾಳೇಗಾರ ನಾಗರಾಜ[17] ಚಂಗಾಳ್ವರ 'ನಾಗರಾಜ'ನೆಂದೇ ಆದರೆ, ಚಂಗಾಳ್ವರ ಅರಸು ಕುಮಾರರು ತಮ್ಮ ಬೀಳಿನ ಸಮಯದಲ್ಲಿ ಕೊಡಗಿನ ವಿವಿಧ ಕಡೆಗಳಲ್ಲಿ ಅಸ್ತಿತ್ವ ಉಳಿಸಿಕೊಂಡುದಕ್ಕೆ ಸಾಕ್ಷಿಯಾಗುತ್ತದೆ.

ಚಂಗಾಳ್ವ ವಂಶದ ಲಭ್ಯ ಇತಿಹಾಸ ಹಾಗೂ ಶಾಸನಗಳ ಹಿನ್ನೆಲೆಯಲ್ಲಿ ಚಂಗಾಳ್ವರ ಪುನರುತ್ಥಾನ ೧೫ನೆಯ ಶತಮಾನದಲ್ಲಿ, ಕೊಡಗು ಶ್ರೀರಂಗಪಟ್ಟಣದಲ್ಲಿ ಚಂಗಾಳ್ವ 'ನಾಗರಾಜ'ನಿಂದ ಆಗಿರುವಲ್ಲಿ ಅವನ ಕಾಲವನ್ನು ಕ್ರಿ.ಶ. ೧೪೨೫_೧೪೫೦ರ ಅವಧಿಯ ಸುಮಾರಿಗೆ ಸಲ್ಲಿಸಬಹುದು. ಅವನಿಗೆ ಹಿಂದೆ ಕೊಡಗು ಶ್ರೀರಂಗಪಟ್ಟಣದಲ್ಲಿ ಚಂಗಾಳ್ವರಸರು ಇದ್ದಿರಬೇಕೆಂಬುದು ಮಹಾಧವ ರಾಜೇಂದ್ರನ ಸಚಿವತ್ವದಿಂದ ವಿದಿತವಾಗುವಂತಿದೆ. 'ನಾಗರಾಜ'ನ ಹಿಂದಿನವರ ಹೆಸರುಗಳು(ಕ್ರಿ.ಶ. ೧೩೦೧-೧೪೨೫) ಚರಿತ್ರೆಯ ದಾಖಲೆಗಳಲ್ಲಿ ಅಲಭ್ಯವಿರುವ ಕಾರಣ, 'ನಾಗರಾಜ' ಬಹುಶಃ ಪಾಲ್ಪರೆಯ ಸೋಮದೇವನ ವಂಶಿಕನಾಗಿ ಕೊಡಗು ಶ್ರೀರಂಗಪಟ್ಟಣದ ಆಳ್ವಿಕೆಗೆ ಬಂದಿರಬೇಕು. ಕುಂತೂರು_ನಾಗರಹೊಳೆ ಬಳಿ_'ನಾಗರಾಜ' ಇವನೇ ಆಗಿರಬಹುದಾದ ಒಂದು ಸಾಧ್ಯತೆಯ ಹಿನ್ನೆಲೆಯಲ್ಲಿ ಈ ಸೂಚನೆ. ಹಾಗಿಲ್ಲದಿದ್ದರೆ ಬೊಪ್ಪದೇವನ ಸಂತತಿಯವನಾಗಿ 'ನಾಗರಾಜ' ಆಳತೊಡಗಿರಬೇಕು.

ನಾಗರಾಜನ ನಂತರ ರಂಗರಾಜ ಹಾಗೂ ಪೆರಿಯಣ್ಣರಾಜ ಕೊಡಗು ಶ್ರೀರಂಗಪಟ್ಟಣವನ್ನು ಆಳಿದ್ದಾರೆ.[18] ಚಂಗಾಳ್ವರ ಪುನರುತ್ಥಾನ ಕಾಲದಲ್ಲಿ ಇಲ್ಲಿದ್ದ ಅವರ ಶಾಖೆಗಳಲ್ಲಿ ಕೊಡಗು ಶ್ರೀರಂಗಪಟ್ಟಣದಲ್ಲಿ ನಿಂತು ಆಳ್ವಿಕೆ ನಡೆಸಿದ ಒಂದು ಶಾಖೆಯ ಪುತ್ರ (ಸೋದರ ?) ಪೌತ್ರ ಪರಂಪರೆಯನ್ನು ಪರಿಗಣಿಸಿ ಅವರ ಕಾಲವನ್ನು ಹೀಗೆ ಸೂಚಿಸಬಹುದು. ಅವರನ್ನು ನಂತರದ ಚಂಗಾಳ್ವರೆಂದೂ ಕರೆಯಬಹುದು : ನಾಗರಾಜ (ಕ್ರಿ.ಶ. ೧೪೨೫-೫೦), ರಂಗರಾಜ (ಕ್ರಿ.ಶ. ೧೪೫೦-೮೫), ಪೆರಿಯಣ್ಣರಾಜ (ಕ್ರಿ.ಶ. ೧೪೮೫_೧೫೦೨) ಮತ್ತು ನಂಜರಾಜ (ಕ್ರಿ.ಶ. ೧೫೦೨_೧೫೨೫).

ಚಂಗಾಳ್ವರು, ಕೆಳದಿ ಹಾಗೂ ಹಾಲೇರಿ ಅರಸರಲ್ಲಿ ಪರಸ್ಪರ ಬಂಧುತ್ವವಿದ್ದು, ಮೊದಲ ಚಂಗಾಳ್ವರಲ್ಲಿ ಉಳಿದುಕೊಂಡಿದ್ದ ಶಾಖೆಗಳಲ್ಲಿ ಒಂದು ಶಾಖೆ ಕೆಳದಿಯತ್ತ

---

15 ಕೊಡಗಿನ ಇತಿಹಾಸ, ಪು. ೫೩, ೭೨

16 ಎಂ. ಜಿ. ನಾಗರಾಜ್ : ಕೊಡುಗು ಜಿಲ್ಲೆಯ ಸುಗ್ಗಿಕಟ್ಟೆಗಳು, ಬೆಂಗಳೂರು, ೧೯೮೯, ಪು. ೪೨

17 ಎಂ. ಜಿ. ನಾಗರಾಜ್ : 'ಕೊಡಗಿನ ಕೊಲೆಕಲ್ಲುಗಳು', ಹರತಿ ಸಿರಿ (ಹೆಚ್. ವಿ. ವೀರನಾಯಕರ ನೆನಪಿನ ಸಂಪುಟ), ಹರ್ತಿಕೋಟೆ, ೧೯೮೭, ಪು. ೭೩೮

ಹೋಗಿರುವ ಸಾಧ್ಯತೆಯನ್ನು ಪರಿಗ್ರಹಿಸಬಹುದು ಎನ್ನುವುದಾದರೆ ಅದು ಕೆಳದಿಗೆ, ಕೊಡಗು ಶ್ರೀರಂಗ ಪಟ್ಟಣದ ಸಾರ್ಥಕ ಕೊಡುಗೆ ಎನ್ನಬಹುದು.

ನಂಜರಾಯಪಟ್ಟಣದ ನಂಜುಂಡರಾಜನ ಮಂತ್ರಿ ಆಗಿದ್ದ ೧೬ನೇ ಶತಮಾನದ ದೇವಪ್ಪಕವಿ ತನ್ನ 'ರಾಮ ವಿಜಯ ಕಾವ್ಯ'ದಲ್ಲಿ ವರ್ಣಿಸಿರುವ ದೇಶ ವಿಷಯವು, ಕೊಡಗು ಶ್ರೀರಂಗಪಟ್ಟಣ – ನಂಜರಾಯಪಟ್ಟಣ ಪ್ರದೇಶದ ವರ್ಣನೆ ಹಾಗೂ ಗಡಿಗಳನ್ನು ಒಳ ಗೊಂಡಿದೆ. ಕಾರಣ ಆ ವರ್ಣನೆಯ ನೆಲೆಗಳು ಇಂದಿಗೂ ಅಲ್ಲಿ ಕಾಣಬರುತ್ತವೆ.

ಕೊಡಗು ಶ್ರೀರಂಗಪಟ್ಟಣದ ಎಲ್ಲೆಗಳು ಮಳೆ ಗಾಲದ ಮೂರು ಕೊಲ್ಲಿಗಳಿಂದ (ಇಂದು ಮಾಗೆರ್ಲ್ಲಿ ಎಂಬ ನೆಲೆ ಆಗಿದೆ) ಕಾವೇರಿ ನದಿಯಿಂದ ಆವೃತವಾಗಿ ನಡುವೆ ಸುಮಾರು ೨೦ ಸಾವಿರ ಎಕರೆ ಪ್ರದೇಶದಲ್ಲಿ ಈಗಿನ ಮಾಲ್ದಾರೆ, ದುಬಾರೆ ಕಾಡು ಪ್ರದೇಶ, ಬೈರವ, ನಂದಿ, ಗಣಪತಿ, ಪಾರ್ವತಿ ವಿಗ್ರಹಗಳನ್ನೊಳಗೊಂಡ ವ್ಯಾಳಿಸೋಪಾನ, ವೃಷಭವನ್ನೊಳಗೊಂಡ ಪಂಚ ಲಿಂಗೇಶ್ವರ ಶಿಲಾದೇಗುಲ, ಅಮ್ಮಾಳೆ ಕೆರೆಗಳು, ಗದ್ದೆ ಗಳು, ರುದ್ರಭೂಮಿ, ದೇವರಕೊಳ, ನೀರಿನಹೊಂಡ ಗಳು, ಗುತ್ತಿಯಲ್ಲಿನ ಶ್ರೀರಂಗನ ಗುಡಿ, ಹಳೆ ದಾಸವಾಳ ಮುಂತಾದ ಹೊಳೆಸಾಲ ಹಳ್ಳಿಗಳನ್ನು ಗಡಿಗ್ರಾಮಗಳ ನ್ನಾಗಿ ಹೊಂದಿರುವ ಪ್ರದೇಶವಾಗಿದೆ. (ದಾಸವಾಳ ಗ್ರಾಮ ಆಗಿನ ಹೂದೋಟವಾಗಿದ್ದಿರಬೇಕು).

೩ನೆಯ ಮಂಗರಸ ಕವಿ ತನ್ನ 'ಶ್ರೀಪಾಲಚರಿತೆ' ಯಲ್ಲಿ ಕೊಡಗಿನ ಬಲ್ಲಾಡುಗಳನ್ನೂ ವಿವರಿಸಿರುವುದು, ದೇವಪ್ಪ ಕವಿಯು ಇಲ್ಲಿನ ಕಾಡಿನಲ್ಲಿರುವ ಹಾಲೆಮರ, ಕಕ್ಕೆಮರ ಮುಂತಾದ ಮರಗಳನ್ನು ಪ್ರಾಣಿಗಳಾದ ಕಡವೆ, ಕಾಟಿಗಳ ಬಗ್ಗೆ ಹೇಳಿರುವುದು, ಅವರಿದ್ದ ಕೊಡಗು ಶ್ರೀರಂಗಪಟ್ಟಣದ ಪರಿಸರವನ್ನು ಪರಿಚಯಿಸುವಂತಿವೆ. ನಂಜುಂಡಕವಿ ಕೊಡಗಿನ ಭಟರ ಶೌರ್ಯವನ್ನು ವರ್ಣಿಸು ವಲ್ಲಿ ಚಂಗನಾಡಿನ ಈ ಪ್ರದೇಶದ ಜನತೆಯ (ನಂಜರಾಜ ನಿಗಾಗಿ ಕಾದ ವಿಜಯ) ಶೌರ್ಯವನ್ನು ಗಮನಿಸಿಯೇ ಹೇಳಿ ದಂತಿದೆ.[19]

ಮೈಸೂರು ದೇಶದ ಉಮ್ಮತ್ತೂರಿನ ಗಂಗರಾಜ ನೊಡನಾದ ಕ್ರಿ.ಶ. ೧೫೧೦ರ ಯುದ್ಧದಲ್ಲಿ ಕೃಷ್ಣದೇವ ರಾಯನು ಪೂರ್ಣ ವಿಜಯಿಯಾದ, ಹಾಗೂ ಶಿವನ ಸಮುದ್ರ ಮತ್ತು ಶ್ರೀರಂಗಪಟ್ಟಣದ ಕೋಟೆಗಳನ್ನು ವಶಪಡಿಸಿಕೊಂಡ ;[20] ಕೃಷ್ಣದೇವರಾಯನಿಗಿದ್ದ ಮೂವರು ಮುಖ್ಯ ರಾಣಿಯರಲ್ಲಿ ಅವನ ಶ್ರೀರಂಗ ಪಟ್ಟಣದ ಸಾಮಂತನ ಮಗಳಾದ ತಿರುಮಲದೇವಿಯೂ ಒಬ್ಬಳು. ಅವನಿಗೆ ಹೆಣ್ಣು ಕೊಟ್ಟ ಮಾವಂದಿರಲ್ಲಿ ಶ್ರೀರಂಗಪಟ್ಟಣದ ಹಾಗೂ ಮಲಬಾರಿನ ಗಡಿಪ್ರದೇಶದ ದೊರೆಯಾದ ಕುಮಾರ ವೀರಯ್ಯ (Cumar Virya)ನೇ ಮುಖ್ಯನಾಗಿದ್ದ.[21] ಕ್ರಿ. ಶ. ೧೫೧೬ರ ಸುಮಾರಿನ ರಾಯಚೂರು ಯುದ್ಧದಲ್ಲಿ ಕೃಷ್ಣದೇವರಾಯನ ಮಾವ ನಾದ ಶ್ರೀರಂಗಪಟ್ಟಣದ ದೊರೆ ಕುಮಾರ ವೀರಯ್ಯ ತನ್ನ ಮೂವತ್ತು ಮಕ್ಕಳೊಡನೆ ಬಂದು, ಸೇನಾಧಿಪತ್ಯ ವನ್ನು ಬೇಡಿ ಪಡೆದು ನಿರ್ವಹಿಸಿದ.[22] ಕೃಷ್ಣದೇವ ರಾಯನ ಮುಖ್ಯ ರಾಣಿಯರಾದ ಚಿನ್ನಾದೇವಿ ಮತ್ತು ತಿರುಮಲದೇವಿ ಕ್ರಿ.ಶ. ೧೫೧೫ರ ಕೊಂಡವೀಡು ಕೋಟೆಯ ಮುತ್ತಿಗೆಯ ಸಮಯದಲ್ಲಿ ಅವನೊಡನಿ ದ್ದರು.[23] ಈ ತಿರುಮಲದೇವಿ ವಿಜಯನಗರದರಸರ ಕಾಲದಲ್ಲಿ ಒಂದು ಪಾಳೆಯಪಟ್ಟಿಗೆ ಒಳಪಟ್ಟ ಶ್ರೀರಂಗ ಪಟ್ಟಣದ (ಆದಿರಂಗನ ನೆಲೆ) ಪಾಳೇಗಾರ ಚಿಕ್ಕ ಒಡೆ

---

19 ಎಚ್. ದೇವೀರಪ್ಪ (ಸಂ.) : ನಂಜುಂಡಕವಿ ವಿರಚಿತ ರಾಮನಾಥ ಚರಿತ, ಪೂರ್ವಾರ್ಧ ಸಂಪುಟ ೨, ಮೈಸೂರು, ೧೯೫೯, ಪು. ೧೮೬ : ಸಂಧಿ ೧೧, ಪದ್ಯ ೩-೪

20 Robert Sewell : *A Forgotten Empire*, New Delhi, 1980, p. 130

21 *Ibid.*, p. 269, note 1

22 *Ibid.*, p. 336

23 T.V. Mahalingam : *Administration and Social Life under Vijayanagar*, Part II, Madras, 1975, p. 42

ಯನ ಮಗಳು, ತುಳುವ ಕೃಷ್ಣದೇವರಾಯನ ಪಟ್ಟದ ರಾಣಿ ಆಗಿದ್ದಳು.[24] ಬಹುಶಃ ಸಿವೆಲ್ ಹೇಳುವ 'ಕುಮಾರ ವೀರಯ್ಯ' ಮತ್ತು ಈ 'ಚಿಕ್ಕ ಒಡೆಯ' ಪದಗಳು ಸಮಾನಾರ್ಥಕವಾಗಿ ಬಳಕೆಯಾಗಿರುವಂತಿದೆ.

ನಂಜುಂಡ ಕವಿಯ 'ವಿಜಯ'ನಿಗೂ 'ಕುಮಾರ ವೀರಯ'ನಿಗೂ ಯಾವ ಸಂಬಂಧವೂ ಇಲ್ಲವೆಂದು ಸ್ಪಷ್ಟವಾಗುತ್ತದೆ. ಏಕೆಂದರೆ 'ವಿಜಯ' ಕೊಡಗು ಶ್ರೀರಂಗಪಟ್ಟಣದ ರಾಜ, ನಂಜರಾಜ(ನಂಜರಾಯ ಪಟ್ಟಣದ ರಾಜ)ನ ಪ್ರತಿನಿಧಿಯಾಗಿ ಉಮ್ಮತ್ತೂರಿನ ಕಾಳಗದಲ್ಲಿ ವಶಪಡಿಸಿಕೊಂಡ ಶ್ರೀರಂಗಪಟ್ಟಣದ ಕೋಟೆ, ಕೊಡಗು ಶ್ರೀರಂಗಪಟ್ಟಣದ್ದಾಗಲು ಸಾಧ್ಯವಿಲ್ಲ. ಕ್ರಿ.ಶ. ೧೫೧೬ರ ಸಮಯದಲ್ಲಿ ರಾಯಚೂರು ಯುದ್ಧದಲ್ಲಿ ಕುಮಾರ ವೀರಯ್ಯ ಭಾಗವಹಿಸಿರುವಲ್ಲಿ, ಕ್ರಿ.ಶ. ೧೫೧೦ರಲ್ಲಿ ವೀರ ಸ್ವರ್ಗವೇರಿದ 'ವಿಜಯ' ಒಬ್ಬನೇ ಆಗಿರಲು ಸಾಧ್ಯವಾಗದು. ಆದ್ದರಿಂದ ಕೃಷ್ಣದೇವರಾಯನ ಮಾವ ಆ ಕಾಲದ ಮೈಸೂರು ಶ್ರೀರಂಗಪಟ್ಟಣಕ್ಕೆ ಸಂಬಂಧಿಸಿದವನೇ ವಿನಹ, ಕೊಡಗು ಶ್ರೀರಂಗಪಟ್ಟಣಕ್ಕೆ ಸಂಬಂಧಿಸಿದವನಲ್ಲ.ಚಂಗಾಳ್ವ ಸಚಿವ ವಂಶದಲ್ಲಿ'ಕುಮಾರ ವೀರಯ' ಎಂಬ ಹೆಸರೂ ದಾಖಲಾಗಿಲ್ಲ. 'ಜಯನೃಪಕಾವ್ಯ'ದ ಮಂಗರಸ ಹೇಳುವ 'ಯುವಕುಮಾರಕ ವಿಜಯ ರಾಜ'ನು, 'ಪಿರಿಯ ಪಟ್ಟಣವನಾಳಿದವ' ಹಾಗೂ ಮಂಗರಸನ ತಂದೆ. ಅಂತಾಗಿ ಅವನ ಕಾಲ ಕ್ರಿ.ಶ. ೧೫೦೦ಕ್ಕೂ ಮುನ್ನಿನದು,ಕೃಷ್ಣದೇವರಾಯನ ಕಾಲಕ್ಕೂ ಮುಂಚಿನದು.

ಕ್ರಿ.ಶ. ೧೫೦೨–೨೫ರ ಅವಧಿಯಲ್ಲಿ ಕೊಡಗು ಶ್ರೀರಂಗಪಣ್ಣದ ರಾಜಧಾನಿಸ್ಥಾನ ನಂಜರಾಯ ಪಟ್ಟಣಕ್ಕೆ ಸಂದಾಯವಾಗಿ, ಅದರ ಭಾಗವೆನಿಸಿದಂತೆ ಕಾಣುತ್ತದೆ. ಕ್ರಿ.ಶ. ೧೮೨೨ ಮಡಿಕೇರಿ ಶಾಸನವು, ನಂಜರಾಯಪಟ್ಟಣ ತಾಲೂಕಿನ ಭಾಗವಾಗಿದ್ದ ಸೂಚನೆಯನ್ನು ನೀಡುತ್ತದೆ. ಜೊತೆಗೆ ಪ್ರಥಮ 'ಬಾರಿಗೆ ಶಾಸನದಲ್ಲಿ ವಿಶೇಷಣ ಹೊತ್ತು 'ಕೊಡಗು ಶ್ರೀರಂಗ ಪಟ್ಟಣ'ವೆಂದೇ ದಾಖಲಾಗಿದೆ. ಆ ಕಾಲಕ್ಕೆ ವೀರ ರಾಜೇಂದ್ರನು ಇಲ್ಲಿ ಕೊಂದ ಹಾಗೂ ಕೈಸೆರೆ ಹಿಡಿದ ಆನೆಗಳ ಸಂಖ್ಯೆಯಿಂದ, ಇದು ದಟ್ಟವಾದ ಕಾಡು ಪ್ರದೇಶವನ್ನೊಳಗೊಂಡಿತ್ತು ಎಂದೂ ವಿದಿತವಾಗುತ್ತದೆ. ಕ್ರಿ.ಶ. ೧೮೨೨ರ ಶಾಸನದ ಮೊದಲಿಗೆ ಹಾಲೇರಿ ಅರಸರ ಆಡಳಿತ ದಾಖಲೆಗಳಲ್ಲಿ ಈ ಹೆಸರೇ ಇದ್ದಿರಬೇಕು. ಏಕೆಂದರೆ ಕ್ರಿ.ಶ. ೧೮೩೪ರಲ್ಲಿ ಹಾವೇರಿ ಅರಸರ ಸ್ವಾಧೀನದಲ್ಲಿದ್ದ ೫೨೦ ಗ್ರಾಮಗಳ ಪೈಕಿ, ಏಳುಸಾವಿರ ಸೀಮೆಯ ಶನಿವಾರಸಂತೆ ಸ್ಯಾಂಡಲ್ ಕೋಟಿ ಫಾರೆಸ್ಟ್ ಪರಿಸರದಲ್ಲಿ 'ಮೈಲಾತಪುರ'ವು ೧೬.೧೮ ಎಕರೆ ವಿಸ್ತೀರ್ಣ ಹೊಂದಿದ್ದರೆ, ಎಡೆನಾಲ್ಕುನಾಡು ತಾಲೂಕಿನ ಅಮ್ಮತ್ತಿ ನಾಡಿಗೆ ಸೇರಿದ ಮಾಲ್ದಾರೆ ಗ್ರಾಮ ೫೩೭೬.೪೫ ಎಕರೆ ವಿಸ್ತೀರ್ಣ ಹಾಗೂ ಕೊಡಗು ಶ್ರೀರಂಗಪಟ್ಟಣ ಗ್ರಾಮವು ೧೫೧೪.೭೫ ಎಕರೆ ವಿಸ್ತೀರ್ಣವನ್ನು ಹೊಂದಿದ್ದುವು.[25] ಇನ್ನು ೧೯೩೫ರ ಸರ್ಕಾರಿ ದಾಖಲೆಯೊಂದರಲ್ಲಿ[26] ಮೈಲಾತಪುರವು ೧೬.೧೮ ಎಕರೆ ವಿಸ್ತೀರ್ಣದ ಜೊತೆಗೆ ಮುಖ್ಯಗ್ರಾಮವಾಗಿ, ಒಡಬನಹಳ್ಳಿ, ನಾಗವಾರ, ಅಮ್ಮಳ್ಳಿ ಎಂಬ ಉಪಗ್ರಾಮಗಳನ್ನು ಸೇರಿಸಿಕೊಂಡು ೧೧೦೭.೪೮ ಎಕರೆ ವಿಸ್ತೀರ್ಣ ಪಡೆದಿದೆ.ಆದರೆ ಕೊಡಗು ಶ್ರೀರಂಗಪಟ್ಟಣವು ೧೫೧೪.೭೫ ಎಕರೆ ವಿಸ್ತೀರ್ಣವನ್ನು ಮಾಲ್ದಾರೆಯ ೫೩೭೩.೪೫ ಎಕರೆ ವಿಸ್ತೀರ್ಣದೊಡನೆ ಸೇರಿಸಿ ೬೮೯೧.೨೦ ಎಕರೆ ಒಟ್ಟಾರೆ ವಿಸ್ತೀರ್ಣವಾಗಿ, ಮಾಲ್ದಾರೆಯ ಉಪಗ್ರಾಮವಾಗಿ ದಾಖಲಾಗಿದೆ. ಸುಮಾರು ಎಂಟು ಕಿ.ಮೀ. ದೂರದಲ್ಲಿ ಕೊಲ್ಲಿಯಾಚೆ ಸಿದ್ದಾಪುರವು ಇದೆ. ಈ ಕಾರಣದಿಂದಲೇ ಸಂಕುಚಿತಗೊಂಡ ಕೊಡಗು ಶ್ರೀರಂಗಪಟ್ಟಣದ ನೆಲೆ, 'ಸಿದ್ದಾಪುರ

---

24 ಸೂರ್ಯನಾಥ ಕಾಮತ್ : 'ಪುಣ್ಯಕ್ಷೇತ್ರ ಐತಿಹಾಸಿಕ ಕೇಂದ್ರ ಶ್ರೀರಂಗಪಟ್ಟಣ', ತರಂಗ (ವಾರಪತ್ರಿಕೆ), ಮೇ ೨೧ ೧೯೮೯, ಪು. ೨೦

25 ಬಾಚರಣಿಯಂಡ ಕೆ.ಅಣ್ಣಯ್ಯ: '೧೮೩೪ನೇ ಇಸವಿಲ್ ಕೊಡಗ್‌ಲ್ ಹಾಲೇರಿ ರಾಜಂಗಡ ಆಳ್ವಿಕೆಲ್ ಆಯಿಂಡ ಸ್ವಾಧೀನತ್ ಇಂಜ ೫೨೦ ಗ್ರಾಮತ್‌ರ ಪೆದ ಪಿಂಞ ೨೩ ಫಾರೆಸ್ಟರ್ ಪೆದ ಇನ್ನನೆ ಉಂಡ', ಬ್ರಹ್ಮಗಿರಿ ಪುತ್ತರಿ ವಿಶೇಷ ಸಂಚಿಕೆ, ಮಡಿಕೇರಿ, ೧೯೮೯, ಪು. ೮೧, ೮೬

26 *Circle List of Coorg Province for the Year 1935*, pp. 3, 23

ಸಮೀಪವಾಗಿದ್ದರೆ ಬಳಿ ಕೊಡಗು ಶ್ರೀರಂಗಪಟ್ಟಣವಿದೆ' ಎಂಬ ರೂಢಿಯೆ ದಾಖಲಾತಿಗೆ ಬಂದಿರುವಂತಿದೆ.

ಕೊಲ್ಲಿಗಳು ಹಾಗೂ ಕಾವೇರಿ ನಡುವಣ ಪ್ರದೇಶ, ಕಾವೇರಿಯ ಪೂರ್ವ–ಪಶ್ಚಿಮ ದಂಡೆಯ ಹಳ್ಳಿಗಳು, ಪ್ರಾಚೀನ ದೇಗುಲಗಳು, ಗದ್ದೆ, ತೋಟ, ಕೆರೆ, ಕಾಡು ಹಾಗೂ ಮಾನವ ವಾಸ್ತವ್ಯಗಳ ಸುಮಾರು ೨೦ ಸಾವಿರ ಎಕರೆಗಳ ವಿಸ್ತೀರ್ಣದ ನೆಲೆಗೆ ತನ್ನ ಹೆಸರನ್ನು ನೀಡಿದ 'ಪ್ರಾಚೀನ ಕೊಡಗು ಶ್ರೀರಂಗಪಟ್ಟಣವು' ಏಳು ಶತಮಾನಗಳ ತನ್ನ ಬದುಕನ್ನು ಇಂದು ಒಂದು 'ಬಿಂದು' ವಿನಷ್ಟು ವಿಸ್ತಾರದಲ್ಲಿ ಐಕ್ಯ ಮಾಡಿಕೊಂಡದ್ದು ಕಾಲಗರ್ಭದಲ್ಲಿನ ಒಂದು ವಿಪರ್ಯಾಸ.

ಒಟ್ಟಾರೆ ಈ ವಿವೇಚನೆಯಿಂದ ಈ ಮುಂದಿನ ಅಂಶಗಳನ್ನು ಸೂಚಿಸಬಹುದು :

೧. ಕೊಡಗು ಶ್ರೀರಂಗಪಟ್ಟಣವು ಕ್ರಿ.ಶ. ಸುಮಾರು ೧೨೨೦–೪೫ರ ನಡುವಣ ಅವಧಿಯಲ್ಲಿ ಉಗಮವಾಗಿರಬೇಕು.

೨. ಚಂಗಾಳ್ವರಸ ಬೊಪ್ಪದೇವನು ಹೊಯ್ಸಳ ಸೋಮೇಶ್ವರನ ಉತ್ತೇಜನದಿಂದ ಅದನ್ನು ವಿಸ್ತರಿಸಿದ ಮತ್ತು ಶ್ರೀರಂಗ ಹಾಗೂ ವೀರಭದ್ರನ ಗುಡಿಗಳನ್ನು ರೂಪಿಸಿದ.

೩. ಕೊಡಗು ಶ್ರೀರಂಗಪಟ್ಟಣದ ಚಂಗಾಳ್ವರ ಒಂದು ಶಾಖೆ ವಲಸೆ ಹೋಗಿ ಕೆಳದಿ ರಾಜವಂಶ ರೂಪಿತವಾಗಿರುವಂತಿದೆ.

೪. ಕೊಡಗು ಶ್ರೀರಂಗಪಟ್ಟಣದರಸರೊಡನೆ ವಿಜಯನಗರದ ಕೃಷ್ಣದೇವರಾಯನಿಗೆ ವೈವಾಹಿಕ ಸಂಬಂಧವಿರಲಿಲ್ಲ, ಆದರೆ ನಂತರದ ಮಾಂಡಲಿಕರು ನಂಜರಾಯಪಟ್ಟಣದ ಚಂಗಾಳ್ವ ರಾಜಕುಮಾರಿಯನ್ನು ಮದುವೆ ಆಗಿದ್ದರು.

೫. ಕೊಡಗು ಶ್ರೀರಂಗಪಟ್ಟಣವು ಹಾಲೇರಿ ಅರಸರ ಕಾಲದಲ್ಲಿ ನಂಜರಾಯಪಟ್ಟಣ ತಾಲೂಕಿಗೆ ಸೇರಿದ ಭಾಗವಾಗಿ ಇಂದು ಕಾಲಗರ್ಭದಲ್ಲಿ ಮರೆಯಾದರೂ ಜಾನಪದ ಮಾತ್ರ ಸದ್ಯಕ್ಕೆ ಅದರ ಸಾಂಸ್ಕೃತಿಕ ಎಳೆಯೊಂದನ್ನು ಜೀವಂತವಿಟ್ಟಿದೆ.